# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 307
2. ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 16.07.2019
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಎತ್ತಿನಹೊಳೆ ಯೋಜನೆ ಪ್ರಾರಂಭಗೊಂಡಿದ್ದು ಯಾವಾಗ ಮತ್ತು ಈವರೆವಿಗೆ ಬಿಡುಗಡೆಯಾಗಿರುವ ಅನುದಾನ ಎಷ್ಟು; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು 2 ಹಂತಗಳಲ್ಲಿ ಕೈಗೆತ್ತಿಕೊಳ್ಳಲಾಗಿದ್ದು, ಯೋಜನೆಯ ಕಾಮಗಾರಿಗಳನ್ನು ಮಾರ್ಚ್ 2014ರಲ್ಲಿ ಪ್ರಾರಂಭಿಸಲಾಗಿರುತ್ತದೆ.<br><br>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಈವರೆವಿಗೆ (ಜೂನ್ 2019) ಒಟ್ಟು ರೂ. 4904.49ಕೋಟಿ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. |
| ಆ) | ಎತ್ತಿನಹೊಳೆ ಯೋಜನೆಯ ರೂಪುರೇಷೇಗಳೇನು: ಸದರಿ ಕಾಮಗಾರಿಗಳು ಯಾವ ಹಂತದಲ್ಲಿವೆ: | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂಪರೇಷೆಗಳ ಹಾಗೂ ಪ್ರಸ್ತುತ ಹಂತದ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ. |
| ಇ) | ಎತ್ತಿನಹೊಳೆ ಯೋಜನೆ ಮಂದಗತಿಯಲ್ಲಿ ಸಾಗಲು ಸರ್ಕಾರಕ್ಕಿರುವ ಅಡೆತಡೆಗಳೇನು: | ರಾಷ್ಟ್ರೀಯ ಹಸಿರು ನ್ಯಾಯಾಧಿಕಾರಣದಲ್ಲಿನ ಅರ್ಜಿಗಳು, ಭೂಸ್ವಾಧೀನದಲ್ಲಿ ಎದುರಾದ ಅಡಚಣೆಗಳು, ಕೇಂದ್ರ ಸರ್ಕಾರದ ಇಲಾಖೆಗಳ ತೀರುವಳಿಯಲ್ಲಿ/ಅನುಮೋದನೆಯಲ್ಲಿನ ವಿಳಂಬ ಹಾಗೂ ಅಕಾಲಿಕ ಮಳೆಯಿಂದ ಯೋಜನೆಯ ಅನುಷ್ಠಾನದಲ್ಲಿ ತಾತ್ಕಾಲಿಕವಾಗಿ ಅಡೆತಡೆಯಾಗಿರುತ್ತದೆ. |
| ಈ) | ಈ ಯೋಜನೆಯನ್ನುಯಾವ ಕಾಲಮಿತಿಯೊಳಗೆ ಮುಕ್ತಾಯಗೊಳಿಸಲಾಗುವುದು? | ಯೋಜನೆಯ ಮೊದಲನೇ ಹಂತದ ಏತ ಕಾಮಗಾರಿಗಳನ್ನು ಪೂರ್ಣಗೊಳಿಸಿ 2019ರ ಮುಂಗಾರಿನಲ್ಲಿ ಪ್ರಾಯೋಗಿಕವಾಗಿ ಚಾಲನೆಗೊಳಿಸಲು ಯೋಜಿಸಲಾಗಿದೆ.<br><br>260 ಕಿ.ಮೀ ಉದ್ದದ ಗುರುತ್ವ ಕಾಲುವೆ ಕಾಮಗಾರಿಗಳನ್ನು ಡಿಸೆಂಬರ್ 2020ರ ಒಳಗೆ ಮತ್ತು ಭೈರಗೊಂಡ್ಲು ಜಲಾಶಯ ಕಾಮಗಾರಿಯನ್ನು ಹಾಗೂ ಫೀಡರ್ ಕಾಲುವೆಗಳನ್ನು 2022-23ನೇ ಸಾಲಿನಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿದೆ. |

**ಸಂಖ್ಯೆ: ಜಸಂಇ 06 ಡಬ್ಲ್ಯೂಎಲ್ಎ 2019**

**(ಡಿ.ಕೆ. ಶಿವಕುಮಾರ್)**
**ಜಲಸಂಪನ್ಮೂಲ ಇಲಾಖೆ**

ವಿಧಾನ ಸಭೆಯ ಸದಸ್ಯರಾದ ಮಾನ್ಯ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಪ್ರಶ್ನೆ ಸಂಖ್ಯೆ: 122(307)ಕ್ಕೆ

## ಅನುಬಂಧ

ಅ) **ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂಪರೇಷೆಗಳು:**

✓ ರಾಜ್ಯದ ಪೂರ್ವಭಾಗದ 7 ಜಿಲ್ಲೆಗಳಾದ ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ರಾಮನಗರ, ತುಮಕೂರು, ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಕೆಲ ಭಾಗಗಳಲ್ಲಿ ಕುಡಿಯುವ ನೀರನ್ನು ಒದಗಿಸುವುದು– ಈ 7 ಜಿಲ್ಲೆಗಳ 29 ತಾಲ್ಲೂಕಿನ 38 ಪಟ್ಟಣ ಪ್ರದೇಶಗಳ 6657 ಗ್ರಾಮಗಳ ಸುಮಾರು 75.59 ಲಕ್ಷ (Projected population for 2023–24) ಜನರಿಗೆ ಅನುಕೂಲವಾಗಲಿದೆ.

✓ ಹೆಸರಘಟ್ಟ ಹಾಗು ತಿಪ್ಪಗೊಂಡನಹಳ್ಳಿ ಜಲಾಶಯಗಳಿಗೆ ಕುಡಿಯುವ ನೀರಿನ(2.50 ಟಿ.ಎಂ.ಸಿ)ಕೊರತೆಯನ್ನು ಭಾಗಶ: ಸರಿದೂಗಿಸುವುದು.

✓ ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ತುಮಕೂರು ಹಾಗೂ ಹಾಸನ ಜಿಲ್ಲೆಗಳ 527 ಕೆರೆಗಳಿಗೆ ಅವುಗಳ ಸಾಮರ್ಥ್ಯದ 50% ಕ್ಕೆ ನೀರು ತುಂಬಿಸಿ ಆ ಭಾಗಗಳ ಅಂತರ್ಜಲ ಅಭಿವೃದ್ಧಿಗೆ ನೀರೊದಗಿಸುವುದು.

✓ ಮೇಲಿನ 7 ಜಿಲ್ಲೆಗಳಿಗೆ ಕುಡಿಯುವ ನೀರಿಗಾಗಿ – 15.029 ಟಿ.ಎಂ.ಸಿ (ನಗರ ಪ್ರದೇಶಗಳಿಗೆ: 135 ಐಅಅಆ ಹಾಗೂ ಹಳ್ಳಿಗಳಿಗೆ: 70 ಐಅಅಆ ಪರಿಗಣಿಸಲಾಗಿದೆ)

✓ ಈ 7 ಜಿಲ್ಲೆಗಳಿಗೆ ಕುಡಿಯುವ ನೀರಿಗಾಗಿ – 15.029 ಟಿ.ಎಂ.ಸಿ

527 ಕೆರೆಗಳನ್ನು ತುಂಬಿಸಲು – 8.967 ಟಿ.ಎಂ.ಸಿ

ಒಟ್ಟು **24.01 ಟಿ.ಎಂ.ಸಿ**

✓ ಎತ್ತಿನಹೊಳೆ ಯೋಜನೆಗೆ ಬಳಸಲು ಉದ್ದೇಶಿಸಿರುವ ನೀರಿನ ಪ್ರಮಾಣ 24.01 ಟಿ.ಎಂ.ಸಿ ಇದ್ದು, ಇದು ನೇತ್ರಾವತಿ ನದಿಯ ಇಳುವರಿಯ (400 ಟಿ.ಎಂ.ಸಿ) ಶೇ 6 ರಷ್ಟುಇರುತ್ತದೆ.

ಆ) **ಯೋಜನೆಯ ಪ್ರಗತಿಯ ಪ್ರಸ್ತುತ ಹಂತ :**

1) **ಎತ್ತಿನಹೊಳೆ ಯೋಜನೆಯ ಹಂತ–1 ರ ಏತ ಕಾಮಗಾರಿಗಳ ಪ್ರಸ್ತುತ ಹಂತ**

✓ ಯೋಜನೆಯ ಮೊದಲನೇ ಹಂತದ ಕಾಮಗಾರಿಯನ್ನು 5 ಪ್ಯಾಕೇಜ್‌ಗಳಲ್ಲಿ ರೂ.3716.50 ಕೋಟಿ ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ.

✓ ಮೊದಲನೇ ಹಂತದ ಏತ ಕಾಮಗಾರಿಗಳು ಬಹುತೇಕ ಪೂರ್ಣಗೊಳ್ಳುವ ಹಂತದಲ್ಲಿದ್ದು, ಮುಂಗಾರು 2019 ರಲ್ಲಿ ಪ್ರಾಯೋಗಿಕವಾಗಿ ಚಾಲನೆಗೊಳಿಸಲು ಯೋಜಿಸಲಾಗಿದೆ.

2) **ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಹಂತ-2 ರಗುರುತ್ವ ಕಾಲುವೆ ನಿರ್ಮಾಣ ಕಾಮಗಾರಿಗಳ ಪ್ರಸ್ತುತ ಹಂತ**

- ✓ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಹಂತ-2 ರಡಿಯ 250 ಕಿ.ಮೀ ಉದ್ದದ ಗುರುತ್ವಾ ಕಾಲುವೆಯ ಪೈಕಿ, ಈಗಾಗಲೇ 230 ಕಿ.ಮೀ ಕಾಲುವೆ ನಿರ್ಮಾಣದ ಕಾಮಗಾರಿಗಳನ್ನು ಒಟ್ಟಾರೆ ರೂ.7055.86 ಕೋಟಿ ಮೊತ್ತದಲ್ಲಿ ಪ್ರಾರಂಭಿಸಲಾಗಿದ್ದು, ಈ ಪೈಕಿ ಸುಮಾರು52.16 ಕಿ.ಮೀ ಉದ್ದದ ಕಾಮಗಾರಿಯು ಪೂರ್ಣಗೊಂಡಿದ್ದು, ಉಳಿಕೆ ಕಾಮಗಾರಿಗಳು ಪ್ರಗತಿಯಲ್ಲಿವೆ.

3) **ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಯ ಪ್ರಸ್ತುತ ಹಂತ**

- ✓ ಗುರುತ್ವ ಕಾಲುವೆ ಕೊನೆಯಲ್ಲಿ ಬರುವ ಕೊರಟಗೆರೆ ತಾಲ್ಲೂಕು ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಯನ್ನು ರೂ.592.00 ಕೋಟಿ ಮೊತ್ತದಲ್ಲಿ ಫೆಬ್ರವರಿ 2018 ರಲ್ಲಿ ಗುತ್ತಿಗೆ ವಹಿಸಲಾಗಿದ್ದು, ಕೊರಟಗೆರೆ ತಾಲ್ಲೂಕಿನ ರೈತರು ದೊಡ್ಡಬಳ್ಳಾಪುರ ತಾಲ್ಲೂಕಿನ ರೈತರಿಗೆ ನೀಡುವದರದಂತೆ ಅವರಿಗೂ ಸಹಾ ಏಕರೂಪದರ ನೀಡಲು ಒತ್ತಾಯಿಸಿದ್ದರಿಂದ ಕಾಮಗಾರಿಗಳಿಗೆ ಅಡೆತಡೆ ಉಂಟಾಗಿರುತ್ತದೆ.
- ✓ ಪ್ರಸ್ತುತ, ನಿಗಮದ ಮಂಡಳಿಯ ಅನುಮೋದನೆಯ ಮೇರೆಗೆ ಏಕ ರೂಪ ಪರಿಹಾರದರ ನಿಗದಿಪಡಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. ಸದರಿ ಪ್ರಸ್ತಾವನೆಗೆ ಸಚಿವ ಸಂಪುಟ ಅನುಮೋದನೆ ನಿರೀಕ್ಷಿಸಲಾಗಿದೆ.

4) **ಫೀಡರ್ ಕಾಲುವೆಗಳ ನಿರ್ಮಾಣ ಕಾಮಗಾರಿ ಕುರಿತಂತೆ ಸಾಧಿಸಿದ ಪ್ರಗತಿ**

- ✓ ಎತ್ತಿನಹೊಳೆ ಗುರುತ್ವ ಕಾಲುವೆಯ ಸರಪಳಿ 244.90 ಕಿ.ಮೀ ನಿಂದ ಹೊರಡುವ ರಾಮನಗರ ಫೀಡರ್ ಕಾಲುವೆಯ ರೂ.1325.96 ಕೋಟಿ ಮೊತ್ತದ ಕಾಮಗಾರಿಯನ್ನು ಪ್ರಾರಂಭಿಸಲಾಗಿದೆ.
- ✓ ಮಧುಗಿರಿ ಫೀಡರ್ ಕಾಲುವೆಯ ರೂ.1052.55 ಕೋಟಿ ಮೊತ್ತದ ಕಾಮಗಾರಿಗೆ ಟೆಂಡರ್ ಅನುಮೋದನೆಯಾಗಿದೆ ಮತ್ತು ಗೌರಿಬಿದನೂರು ಫೀಡರ್ ಕಾಲುವೆಯ ರೂ.679.15 ಕೋಟಿ ಮೊತ್ತದ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ.

******